# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 23(132)

ವಿಧಾನ ಪರಿಷತ್ ಸದಸ್ಯರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 08.12.2020

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಹಾಲು ಉತ್ಪಾದಕರಿಗೆ ಸರ್ಕಾರ ಪ್ರತಿ ಲೀಟರ್‌ಗೆ ನೀಡುತ್ತಿರುವ ಸಹಾಯಧನ ಎಷ್ಟು; | ರೂ. 5/- |
| ಆ | ಸಹಾಯಧನ ಬಿಡುಗಡೆಗೆ ಬಾಕಿ ಇರುವ ಮೊತ್ತವೆಷ್ಟು; | ಜುಲೈ-2020 ರವರೆಗೆ ಕ್ಷೀರಸಿರಿ ತಂತ್ರಾಂಶದ ಮೂಲಕ ಹಾಲು ಉತ್ಪಾದಕರಿಗೆ ಪಾವತಿಸಲಾಗಿದ್ದು, ಆಗಸ್ಟ್-2020 ರಿಂದ ಅಕ್ಟೋಬರ್-2020 ರವರೆಗೆ ಅಂದಾಜು ರೂ.369.00 ಕೋಟಿ ಬಾಕಿ ಇರುತ್ತದೆ. |
| ಇ | ಯಾವ ಕಾಲಮಿತಿಯಲ್ಲಿ ಬಾಕಿ ಸಹಾಯಧನ ಬಿಡುಗಡೆಗೊಳಿಸಲಾಗುವುದು. | ಆಗಸ್ಟ್-2020 ರಿಂದ ಹಾಲು ಉತ್ಪಾದಕರಿಗೆ ಸರ್ಕಾರದ ಪ್ರೋತ್ಸಾಹಧನವನ್ನು FRUITS ತಂತ್ರಾಂಶದ ಮೂಲಕ ಪಾವತಿಸಲು ಯೋಜಿಸಲಾಗಿದ್ದು, FRUITS ತಂತ್ರಾಂಶದಲ್ಲಿ ಹಾಲು ಉತ್ಪಾದಕರ ಮಾಹಿತಿ ನೋಂದಣಿ ಪ್ರಕ್ರಿಯೆ ಪ್ರಗತಿಯಲ್ಲಿದ್ದು, ಮುಂದಿನ ೨ ತಿಂಗಳಲ್ಲಿ ಬಿಡುಗಡೆ ಮಾಡಲಾಗುವುದು. |
| ಈ | ಹಾಲು ಉತ್ಪಾದಕರ ಒಕ್ಕೂಟಗಳು ಹಾಲು ಉತ್ಪಾದಕರಿಗೆ ಪ್ರತಿ ಲೀಟರ್‌ಗೆ ರೂ.2.00/- ಗಳು ಕಡಿಮೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | ಕೋವಿಡ್-19 ರ ಪ್ರಯುಕ್ತ 'ನಂದಿನಿ' ಹಾಲಿನ ಮಾರಾಟದ ಪ್ರಮಾಣ ಪ್ರತಿ ದಿನ 5-6 ಲಕ್ಷ ಲೀಟರ್‌ನಷ್ಟು ತೀವ್ರವಾಗಿ ಕುಸಿದಿದ್ದು, ಜೊತೆಗೆ ಹಾಲು ಶೇಖರಣೆ ಪ್ರಮಾಣವೂ ಕೂಡ ಪ್ರತಿ ದಿನ 4-5 ಲಕ್ಷ ಲೀಟರ್ ಹೆಚ್ಚಾಗಿರುತ್ತದೆ. ಇದರಿಂದಾಗಿ ಹೆಚ್ಚುವರಿ ಹಾಲನ್ನು ಹಾಲಿನ ಪುಡಿಯಾಗಿ ಪರಿವರ್ತಿಸುವ ಪ್ರಮಾಣ ಹೆಚ್ಚಾಗಿರುತ್ತದೆ. ಹಾಲಿನ ಪುಡಿ (Skimmed Milk Powder) ಮಾರುಕಟ್ಟೆ ದರವು ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ಕೋವಿಡ್ ಪೂರ್ವದಲ್ಲಿದ್ದ ಸರಾಸರಿ ದರ ರೂ.250/- ಕೆಜಿಯಿಂದ ರೂ.150 ಪ್ರತಿ ಕೆಜಿಗೆ ಕುಸಿದಿತ್ತು. ಇದರಿಂದಾಗಿ ಹಾಲು ಒಕ್ಕೂಟಗಳಿಗೆ ತೀವ್ರ ನಷ್ಟವುಂಟಾಗುತ್ತಿದ್ದು, ಒಕ್ಕೂಟಗಳು ಹಾಲು ಶೇಖರಣೆ ದರವನ್ನು ಅನಿವಾರ್ಯವಾಗಿ ಕಡಿಮೆ ಮಾಡಿರುತ್ತವೆ. |

| | | |
|---|---|---|
| ಉ | ಈ ರೀತಿ ಕಡಿಮೆ ಮಾಡಿರುವುದರಿಂದ ಹಾಲು ಉತ್ಪಾದಕರು ಹೆಚ್ಚಿನ ಆರ್ಥಿಕ ತೊಂದರೆಗೊಳಗಾಗಿದ್ದು, ಕಡಿಮೆ ಮಾಡಿರುವ ಮೊತ್ತವನ್ನು ಸರ್ಕಾರವೇ ಹಾಲು ಉತ್ಪಾದಕರಿಗೆ ನೀಡಲು ಸಾಧ್ಯವೇ? | ಕೋವಿಡ್-19 ರ ಪ್ರಯುಕ್ತ ರಾಜ್ಯದ ಆರ್ಥಿಕ ಚಟುವಟಿಕೆಗಳು ತೀವ್ರತರ ಸಂಕಷ್ಟಕ್ಕೆ ಒಳಗಾಗಿದ್ದು, ರಾಜ್ಯವು ಆರ್ಥಿಕ ಸಂಕಷ್ಟ ಎದುರಿಸುತ್ತಿರುವ ಹಿನ್ನೆಲೆಯಲ್ಲಿ ಸದರಿ ಮೊತ್ತವನ್ನು ಸರ್ಕಾರದಿಂದ ನೀಡಲು ಸಾಧ್ಯವಾಗುವುದಿಲ್ಲ. |

ಪಸಂಮೀ ಇ-296 ಸಲೆವಿ 2020

(ಪ್ರಭು ಬಿ. ಚವ್ಹಾಣ್)
**ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು**